# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 231
2. ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ
3. ಉತ್ತರಿಸಬೇಕಾದ ದಿನಾಂಕ : 10-12-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕೊಡಗು ಜಿಲ್ಲೆಯಲ್ಲಿ ಪ್ರತಿ ವರ್ಷ ಮಳೆಗಾಲದಲ್ಲಿ ಕಾವೇರಿ ನದಿಯು ಉಕ್ಕಿ ಹರಿಯುವುದರಿಂದ ನದಿಯ ತೀರ ಪ್ರದೇಶಗಳಾದ ಕುಶಾಲನಗರದ ಕೆಲವು ಬಡಾವಣೆಗಳು ಮತ್ತು ಮಡಿಕೇರಿ ತಾಲ್ಲೂಕಿನ ಹೋದ್ದೂರು, ಚೆರಿಯಪರಂಬು ಮತ್ತು ಭಾಗಮಂಡಲ ಸೇರಿದಂತೆ ಜಿಲ್ಲೆಯ ವಿವಿಧ ಕಡೆಗಳಲ್ಲಿ ಪ್ರವಾಹವು ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ | ಬಂದಿದ್ದಲ್ಲಿ, ಈ ಮಳೆಗಾಲದ ಪ್ರವಾಹವನ್ನು ಶಾಶ್ವತವಾಗಿ ತಡೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಇದರ ಬಗ್ಗೆ ಯಾವುದಾದರೂ ಚರ್ಚೆಗಳು ಅಥವಾ ಕ್ರಮಗಳು ಸರ್ಕಾರದ ಮಟ್ಟದಲ್ಲಿ ನಡೆಯುತ್ತಿದೆಯೇ? (ವಿವರ ನೀಡುವುದು) | ಮಳೆಗಾಲದ ಪ್ರವಾಹವನ್ನು ಶಾಶ್ವತವಾಗಿ ತಡೆಯಲು ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ :<br>1. ಹಾರಂಗಿ ಜಲಾನಯನ ಪ್ರದೇಶ ಮತ್ತು ನದಿ ಪಾತ್ರದ ಪುನಶ್ಚೇತನ ಹಾಗೂ ರಕ್ಷಣಾ ಕಾಮಗಾರಿಯ ಅಂದಾಜಿಗೆ ದಿನಾಂಕ:19-11-2020 ರ ಸರ್ಕಾರದ ಆದೇಶದಲ್ಲಿ ರೂ.130.00 ಕೋಟಿ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಮುಂದಿನ ಕ್ರಮ ಕೈಗೊಳ್ಳಲಾಗುತ್ತಿದೆ.<br>2. ಕಾವೇರಿ ಹಾಗೂ ಕನ್ನಿಕೆ ನದಿಗಳಲ್ಲಿ ಗಿಡ-ಗಂಟೆಗಳನ್ನು ತೆರವುಗೊಳಿಸಲು ದಿನಾಂಕ:10-02-2020 ರಲ್ಲಿ ರೂ.1.90 ಕೋಟಿ ಮೊತ್ತದ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಕಾವೇರಿ ನೀರಾವರಿ ನಿಗಮ ವತಿಯಿಂದ ಕಾಮಗಾರಿಯನ್ನು ಕೈಗೊಂಡು ಪೂರ್ಣಗೊಳಿಸಲಾಗಿರುತ್ತದೆ.<br>3. ಕೊಪ್ಪ ಸೇತುವೆ ಹಾಗೂ ತಪೋವನ ಹತ್ತಿರ ಕಾವೇರಿ ಹೊಳೆಯಲ್ಲಿ ತುಂಬಿರುವ ಹೂಳನ್ನು ಮತ್ತು ಗಿಡಗಂಟಿ ತೆಗೆಯಲು 2019-20ನೇ ಸಾಲಿನಲ್ಲಿ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ರವರ ಎನ್.ಡಿ.ಆರ್.ಎಫ್ ಲೆಕ್ಕ ಶೀರ್ಷಿಕೆಯಡಿ ರೂ.88.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. |

*ಸಂಖ್ಯೆ:ಜಸಂಇ 159 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು